ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 17 ನೇ ಮಾರ್ಚ್, 2020

ಬೀದರ್ ಜಿಲ್ಲೆಯಲ್ಲಿ ಕುಡಿಯುವ ನೀರಿನ ಯೋಜನೆಗೆ ಬಿಡುಗಡೆಯಾದ ಹಣ ಕುರಿತು

ಶ್ರೀ ರಘುನಾಥ್ ರಾವ್ ಮಲ್ಕಾಪೂರೆ(ವಿಧಾನಸಭೆಯಿಂದ ಚುನಾಯಿತರಾದವರು):-

1070 (1266) ಮಾನ್ಯ ನಗರಾಭಿವೃದ್ಧಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಬೀದರ್ ನಗರದಲ್ಲಿ 24/7 ಕುಡಿಯುವ ನೀರಿನ ಪೈಪ್‌ಲೈನ್ ಕಾಮಗಾರಿಯು ಪ್ರಗತಿಯಲ್ಲಿದೆಯೇ; ಹಾಗಿದ್ದಲ್ಲಿ, ಯಾವ ಯಾವ ವಾರ್ಡ್‌ಗಳಲ್ಲಿ ಪೈಪ್‌ಲೈನ್ / ನೀರಿನ ಕನೆಕ್ಷನ್ ಅಳವಡಿಸಲಾಗಿದೆ; (ವಾರ್ಡ್‌ವಾರು ಸಂಪೂರ್ಣ ಮಾಹಿತಿ ನೀಡುವುದು)

(ಆ) ಈ ಕುಡಿಯುವ ನೀರಿನ ಯೋಜನೆಯಡಿಯಲ್ಲಿ ಅಳವಡಿಸಿರುವ ಪೈಪ್‌ಲೈನ್‌ಗಳು ಹಾಳಾಗಿದ್ದು, ಸುಮಾರು ಮನೆಗಳಿಗೆ ನೀರು ಸರಬರಾಜು ಆಗದೆ ಇರುವುದು ನಿಜವೇ; ಹಾಗಿದ್ದಲ್ಲಿ, ಇದನ್ನು ದುರಸ್ಥಿ ಮಾಡದೇ ಇರುವುದರಿಂದ ಸಾರ್ವಜನಿಕರಿಗೆ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಕೂಡಲೇ ಯಾವ ಕ್ರಮ ಕೈಗೊಳ್ಳಲಾಗುವುದು; (ವಿವರ ನೀಡುವುದು)

(ಇ) ಈ 24/7 ಯೋಜನೆ ಪ್ರಾರಂಭದಿಂದ ಇಲ್ಲಿಯವರೆಗೆ ಕುಡಿಯುವ ನೀರಿನ ಯೋಜನೆಗೆ ಎಷ್ಟು ಹಣ ಮಂಜೂರಾಗಿದೆ; ಮಂಜೂರಾಗಿದ್ದಲ್ಲಿ, ಖರ್ಚು ಮಾಡಲಾದ ಹಣವೆಷ್ಟು? (ವರ್ಷವಾರು ವಿವರ ನೀಡುವುದು)